KA / BG-GPO/2515/WPP-47/2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಫೆಬ್ರವರಿ ೧೯, ೨೦೦೯ (ಮಾಘ ೩೦, ಶಕ ವರ್ಷ ೧೯೩೦) | ಸಂಚಿಕೆ ೮ |
|---|---|---|

## ಭಾಗ – ೬

## ಬೆಂಗಳೂರು ವಿಭಾಗಕ್ಕೆ ಮತ್ತು ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ತುಮಕೂರು, ಚಿತ್ರದುರ್ಗ, ದಾವಣಗೆರೆ ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ ಸ್ಥಳೀಯವಾಗಿ ಅನ್ವಯವಾಗುವ ಅಧಿಸೂಚನೆಗಳು ಮತ್ತು ಆದೇಶಗಳು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಪ್ರಿಲಿಮಿನರಿ ಅಧಿಸೂಚನೆ**

**ಸಂ.ಕೆ.ಎಸ್.ಎ:ಸಿ.ಆರ್:22/07–08, ದಿನಾಂಕ: 24ನೇ ಡಿಸೆಂಬರ್ 2008**

ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ ವ್ಯಾಪ್ತಿಯ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿ ಇರುವ ಮನೆಗಳು ಒತ್ತೊತ್ತಾಗಿದ್ದು ಜನರು ಸಾಮಾನ್ಯ ಸ್ಥಿತಿಯಲ್ಲಿ ವಾಸಿಸಲು ಅನಾನುಕೂಲ ಉಂಟಾಗಿದ್ದು, ಹಾಲಿ ಇರುವ ಗುಡಿಸಲುಗಳ ದುರಸ್ಥಿ ಇಲ್ಲದೇ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದ ಕಾರಣ ಅನಾರೋಗ್ಯಕರ ವಾತಾವರಣ ಉಂಟಾಗಿರುವುದನ್ನು ಅಧಿಕಾರಿಗಳು ವರದಿ ಮಾಡಿರುತ್ತಾರೆ. ಈ ಪ್ರದೇಶವು ಜನಸಂದಣಿಯಿಂದ ಕೂಡಿದ್ದು, ಮಾಲಿನ್ಯ ಮತ್ತು ಅನಾರೋಗ್ಯಕರ ವಾತಾವರಣದಿಂದ ಕೂಡಿರುವುದರಿಂದ ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ಕೊಳಚೆ ಪ್ರದೇಶವೆಂದು ಘೋಷಿಸುವುದು ಅವಶ್ಯವೆಂದು ಕಂಡುಬಂದಿರುತ್ತದೆ.

ಆದ್ದರಿಂದ ಈ ಕೆಳ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಸೆಕ್ಷನ್ 3 ರಡಿ ಹಾಗೂ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರು 'ಕೊಳಚೆ ಪ್ರದೇಶ' ವೆಂದು ಘೋಷಿಸಲು ಉದ್ದೇಶಿಸಿರುತ್ತಾರೆ.

ಮೇಲ್ಕಂಡ ಈ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ಕಾರ್ಯದರ್ಶಿಗಳು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಶೇಷಾದ್ರಿಪುರ, ಬೆಂಗಳೂರು–20 ರವರಿಗೆ ಲಿಖಿತವಾಗಿ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ (15) ಹದಿನೈದು ದಿವಸಗಳ ಕಾಲಾವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಮುನೇಶ್ವರ ನಗರ (ಮುತ್ಯಾಲನಗರ) ಕೊಳಚೆ ಪ್ರದೇಶದ ಚಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ.

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಕೊಳಚೆ ಪ್ರದೇಶದಲ್ಲಿರುವ ಜಮೀನಿನ ಮಾಲೀಕರ ಹೆಸರು | ಸರ್ವೆ. ನಂ. | ವಿಸ್ತೀರ್ಣ ಎ.ಗುಂ. | ಚೆಕ್ಕುಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | ಮುನೇಶ್ವರನಗರ (ಮುತ್ಯಾಲನಗರ) ಕೊಳಚೆ ಪ್ರದೇಶ, ಯಶವಂತಪುರ ಹೋಬಳಿ, ಬೆಂಗಳೂರು ಉತ್ತರ ತಾಲ್ಲೂಕು | ರೈಲ್ವೆ | – | 0.38 | ಖಾಸಗಿ ಪ್ರದೇಶ | ರೈಲ್ವೇ ಪ್ರದೇಶ | ರೈಲ್ವೇ ಪ್ರದೇಶ | ಖಾಸಗಿ ಪ್ರದೇಶ |

**ಜಿ.ಎನ್. ನಾಯಕ್**
ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್. 25

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಪ್ರಿಲಿಮಿನರಿ ಅಧಿಸೂಚನೆ**

**ಸಂ.ಕೆ.ಎಸ್.ಎ:ಸಿ.ಆರ್:16/08–09, ದಿನಾಂಕ: 12ನೇ ಜನವರಿ 2009**

ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರ ಹೋಬಳಿ ವ್ಯಾಪ್ತಿಯ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿ ಇರುವ ಮನೆಗಳು ಒತ್ತೊತ್ತಾಗಿದ್ದು ಜನರು ಸಾಮಾನ್ಯ ಸ್ಥಿತಿಯಲ್ಲಿ ವಾಸಿಸಲು ಅನಾನುಕೂಲ ಉಂಟಾಗಿದ್ದು, ಹಾಲಿ ಇರುವ ಗುಡಿಸಲುಗಳ ದುರಸ್ಥಿ ಇಲ್ಲದೇ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದ ಕಾರಣ ಅನಾರೋಗ್ಯಕರ ವಾತಾವರಣ ಉಂಟಾಗಿರುವುದನ್ನು ಅಧಿಕಾರಿಗಳು ವರದಿ ಮಾಡಿರುತ್ತಾರೆ. ಈ ಪ್ರದೇಶವು ಜನಸಂದಣಿಯಿಂದ ಕೂಡಿದ್ದು, ಮಾಲಿನ್ಯ ಮತ್ತು ಅನಾರೋಗ್ಯಕರ ವಾತಾವರಣದಿಂದ ಕೂಡಿರುವುದರಿಂದ ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ಕೊಳಚೆ ಪ್ರದೇಶವೆಂದು ಘೋಷಿಸುವುದು ಅವಶ್ಯವೆಂದು ಕಂಡುಬಂದಿರುತ್ತದೆ.

ಆದ್ದರಿಂದ ಈ ಕೆಳ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಸೆಕ್ಷನ್ 3 ರಡಿ ಹಾಗೂ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರು 'ಕೊಳಚೆ ಪ್ರದೇಶ' ವೆಂದು ಘೋಷಿಸಲು ಉದ್ದೇಶಿಸಿರುತ್ತಾರೆ.

ಮೇಲ್ಕಂಡ ಈ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ಕಾರ್ಯದರ್ಶಿಗಳು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಶೇಷಾದ್ರಿಪುರ, ಬೆಂಗಳೂರು–20 ರವರಿಗೆ ಲಿಖಿತವಾಗಿ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ (15) ಹದಿನೈದು ದಿವಸಗಳ ಕಾಲಾವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರ ಹೋಬಳಿ, ವಿಭೂತಿಪುರ ಗ್ರಾಮದ ನೆಲ್ಲೂರುಪುರಂ ಭಾಗ–IIರ ಕೊಳಚೆ ಪ್ರದೇಶದ ಚಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ.

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಕೊಳಚೆ ಪ್ರದೇಶದಲ್ಲಿರುವ ಜಮೀನಿನ ಮಾಲೀಕರ ಹೆಸರು | ಸರ್ವೆ. ನಂ. | ವಿಸ್ತೀರ್ಣ ಎ.ಗುಂ. | ಚೆಕ್ಕುಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | ನೆಲ್ಲೂರುಪುರಂ ಭಾಗ–II ರ ಕೊಳಚೆ ಪ್ರದೇಶ ವಿಭೂತಿಪುರ ಗ್ರಾಮ, ಕೆ.ಆರ್.ಪುರ ಹೋಬಳಿ, ಬೆಂಗಳೂರು ಪೂರ್ವ ತಾಲ್ಲೂಕು | ಸರ್ಕಾರ ಖರಾಬು ಬಂಡೆ | 122<br>124 | 0–28<br>0–36<br>ಒಟ್ಟು<br>1–24 | ರಸ್ತೆ<br>ರಸ್ತೆ | ಸ.ನಂ.121<br>ಸ.ನಂ.124 | ಸ.ನಂ.123<br>ಸ.ನಂ.124 ರ ಉಳಿಕೆ ಜಾಗ | ಸ.ನಂ.122<br>ಹೆಚ್.ಎ.ಎಲ್ ಆಸ್ತಿ |

**ಜಿ.ಎನ್. ನಾಯಕ್**
ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್. 85

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಪ್ರಿಲಿಮಿನರಿ ಅಧಿಸೂಚನೆ

**ಸಂ.ಕೆ.ಎಸ್.ಎ:ಸಿ.ಆರ್:17/08–09, ದಿನಾಂಕ: 20ನೇ ಜನವರಿ 2009**

ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್.ಪುರ ಹೋಬಳಿ ವ್ಯಾಪ್ತಿಯ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿ ಇರುವ ಮನೆಗಳು ಒತ್ತೊತ್ತಾಗಿದ್ದು ಜನರು ಸಾಮಾನ್ಯ ಸ್ಥಿತಿಯಲ್ಲಿ ವಾಸಿಸಲು ಅನಾನುಕೂಲ ಉಂಟಾಗಿದ್ದು, ಹಾಲಿ ಇರುವ ಗುಡಿಸಲುಗಳ ದುರಸ್ಥಿ ಇಲ್ಲದೇ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದ ಕಾರಣ ಅನಾರೋಗ್ಯಕರ ವಾತಾವರಣ ಉಂಟಾಗಿರುವುದನ್ನು ಅಧಿಕಾರಿಗಳು ವರದಿ ಮಾಡಿರುತ್ತಾರೆ. ಈ ಪ್ರದೇಶವು ಜನಸಂದಣಿಯಿಂದ ಕೂಡಿದ್ದು, ಮಾಲಿನ್ಯ ಮತ್ತು ಅನಾರೋಗ್ಯಕರ ವಾತಾವರಣದಿಂದ ಕೂಡಿರುವುದರಿಂದ ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ಕೊಳಚೆ ಪ್ರದೇಶವೆಂದು ಘೋಷಿಸುವುದು ಅವಶ್ಯವೆಂದು ಕಂಡುಬಂದಿರುತ್ತದೆ.

ಆದ್ದರಿಂದ ಈ ಕೆಳ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಸೆಕ್ಷನ್ 3 ರಡಿ ಹಾಗೂ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರು 'ಕೊಳಚೆ ಪ್ರದೇಶ' ವೆಂದು ಘೋಷಿಸಲು ಉದ್ದೇಶಿಸಿರುತ್ತಾರೆ.

ಮೇಲ್ಕಂಡ ಈ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ಕಾರ್ಯದರ್ಶಿಗಳು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಶೇಷಾದ್ರಿಪುರ, ಬೆಂಗಳೂರು–20 ರವರಿಗೆ ಲಿಖಿತವಾಗಿ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ (15) ಹದಿನೈದು ದಿವಸಗಳ ಕಾಲಾವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಬೇಲೂರುನಾಗಸಂದ್ರ ಗ್ರಾಮದ ಅಂಬೇಡ್ಕರ್ ಕೊಳಚೆ ಪ್ರದೇಶದ ಚಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ.

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಕೊಳಚೆ ಪ್ರದೇಶದಲ್ಲಿರುವ ಜಮೀನಿನ ಮಾಲೀಕರ ಹೆಸರು | ಸರ್ವೆ. ನಂ. | ವಿಸ್ತೀರ್ಣ ಎ.ಗುಂ. | ಚೆಕ್ಕುಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | ಅಂಬೇಡ್ಕರ್ ಕೊಳಚೆ ಪ್ರದೇಶ, ಛಲ್ಲಘಟ್ಟ, ಬೇಲೂರು ನಾಗಸಂದ್ರ ಗ್ರಾಮ, ವರ್ತೂರು ಹೋಬಳಿ, ಬೆಂಗಳೂರು ಪೂರ್ವ ತಾಲ್ಲೂಕು | ಸರ್ಕಾರಿ | 12 | 4.37 | NAL ರಸ್ತೆ | ಇದೇ ನಂಬರಿನ ಖಾಲಿ ಪ್ರದೇಶ | ಇದೇ ನಂಬರಿನ ಖಾಲಿ ಪ್ರದೇಶ | ಇದೇ ನಂಬರಿನಲ್ಲಿರುವ ಕೊಳಚೆ ನೀರಿನ ಕಟ್ಟೆ |

**ಜಿ.ಎನ್. ನಾಯಕ್**

ಪಿ.ಆರ್. 86

ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಪ್ರಿಲಿಮಿನರಿ ಅಧಿಸೂಚನೆ

**ಸಂ.ಕೆ.ಎಸ್.ಎ:ಸಿ.ಆರ್:43/00–01, ದಿನಾಂಕ: 30ನೇ ಡಿಸೆಂಬರ್ 2008**

ಬೆಂಗಳೂರು ನಗರ ವ್ಯಾಪ್ತಿಯ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿ ಇರುವ ಮನೆಗಳು ಒತ್ತೊತ್ತಾಗಿದ್ದು ಜನರು ಸಾಮಾನ್ಯ ಸ್ಥಿತಿಯಲ್ಲಿ ವಾಸಿಸಲು ಅನಾನುಕೂಲ ಉಂಟಾಗಿದ್ದು, ಹಾಲಿ ಇರುವ ಗುಡಿಸಲುಗಳ ದುರಸ್ಥಿ ಇಲ್ಲದೇ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದ ಕಾರಣ ಅನಾರೋಗ್ಯಕರ ವಾತಾವರಣ ಉಂಟಾಗಿರುವುದನ್ನು ಅಧಿಕಾರಿಗಳು ವರದಿ ಮಾಡಿರುತ್ತಾರೆ. ಈ ಪ್ರದೇಶವು ಜನಸಂದಣಿಯಿಂದ ಕೂಡಿದ್ದು, ಮಾಲಿನ್ಯ ಮತ್ತು ಅನಾರೋಗ್ಯಕರ ವಾತಾವರಣದಿಂದ ಕೂಡಿರುವುದರಿಂದ ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ

(ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ಕೊಳಚೆ ಪ್ರದೇಶವೆಂದು ಘೋಷಿಸುವುದು ಅವಶ್ಯವೆಂದು ಕಂಡುಬಂದಿರುತ್ತದೆ.

ಆದ್ದರಿಂದ ಈ ಕೆಳ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಸೆಕ್ಷನ್ 3 ರಡಿ ಹಾಗೂ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರು 'ಕೊಳಚೆ ಪ್ರದೇಶ' ವೆಂದು ಘೋಷಿಸಲು ಉದ್ದೇಶಿಸಿರುತ್ತಾರೆ.

ಮೇಲ್ಕಂಡ ಈ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ಕಾರ್ಯದರ್ಶಿಗಳು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಶೇಷಾದ್ರಿಪುರ, ಬೆಂಗಳೂರು–20 ರವರಿಗೆ ಲಿಖಿತವಾಗಿ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ (15) ಹದಿನೈದು ದಿವಸಗಳ ಕಾಲಾವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

ಬೆಂಗಳೂರು ನಗರ ವ್ಯಾಪ್ತಿಯ ದಂಡು ರೈಲ್ವೆ ನಿಲ್ದಾಣ ಬಳಿಯ ತುಂಗಭದ್ರಾ ಕೊಳಚೆ ಪ್ರದೇಶದ ಚಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ.

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಕೊಳಚೆ ಪ್ರದೇಶದಲ್ಲಿರುವ ಜಮೀನಿನ ಮಾಲೀಕರ ಹೆಸರು | ಸರ್ವೆ. ನಂ. | ವಿಸ್ತೀರ್ಣ ಎ.ಗುಂ. | ಚೆಕ್ಕುಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | ತುಂಗಭದ್ರ ಕೊಳಚೆ ಪ್ರದೇಶ, ಬೆಂಗಳೂರು ನಗರ ದಂಡು ರೈಲ್ವೆ ನಿಲ್ದಾಣದ ಹತ್ತಿರ ಬೆಂಗಳೂರು | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ/ಬೆಂಗಳೂರು ಮಹಾನಗರ ಪಾಲಿಕೆ | PTS 906 CTS No.450 ರ ಹಿಂಭಾಗ | 0.07 | ರೈಲ್ವೆ ಸ್ವತ್ತು ಮತ್ತು ಹಾವಾಡಿಗರ ಕಾಲೋನಿ | ಹಳ್ಳ (ಚರಂಡಿ) | ರೈಲ್ವೇ ಲೈನ್ | ಕೊಡವ ಸಮಾಜ ಮತ್ತು ರಾಘವರೆಡ್ಡಿಯ ವರ ಸ್ವತ್ತು |

**ಜಿ.ಎನ್. ನಾಯಕ್**

ಪಿ.ಆರ್. 87

ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು

## ಕಲಂ 4(1)ರ ರದ್ದಿಯಾತಿ ಅಧಿಸೂಚನೆ

**ಸಂ. ಎಲ್‌ಎಕ್ಯೂ.ಎಸ್‌ಆರ್:44/2008–09, ದಿನಾಂಕ: 6ನೇ ಜನವರಿ 2009**

ಭೂಸ್ವಾಧೀನ ಕಾಯಿದೆ 1894 (ಕೇಂದ್ರ ಕಾಯಿದೆ 1894)ರ ಕಲಂ ಹೊರಡಿಸಿರುವ ಕಲಂ 4(1) ರ ಅಧಿಸೂಚನೆ ಸಂ. ಎಲ್‌ಎಕ್ಯೂ. ಎಸ್‌ಆರ್: 56/2007–08 ದಿನಾಂಕ: 24.11.2007 ರಂತೆ ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು ಇವರಿಂದ ಪರಿಶಿಷ್ಟ ಜಾತಿ ಹಾಗೂ ಪಂಗಡದವರಿಗೆ ಸ್ಮಶಾನ ಸೌಲಭ್ಯಕ್ಕಾಗಿ ಅನುಮೋದಿಸಿದ್ದು, ಸದರಿ ಅಧಿಸೂಚನೆಯು ದಿನಾಂಕ: 27.12.2007ರ ಕರ್ನಾಟಕ ರಾಜ್ಯ ಪತ್ರದ ಭಾಗ – 6 ಪುಟ ಸಂ. 1260–1261 ರಲ್ಲಿ ಪ್ರಕಟವಾಗಿರುತ್ತದೆ. ಆದರೆ ಈ ಕೆಳಕಂಡ ಅನುಸೂಚಿಯಲ್ಲಿ ನಮೂದಿಸಿರುವ ಸ.ನಂ.ನಲ್ಲಿ ಜೆ.ಎಂ.ಸಿ.ಯಂತೆ ಭೂಸ್ವಾಧೀನಕ್ಕೆ ಒಳಪಡುವುದಿಲ್ಲ. ಆದ್ದರಿಂದ ಕಲಂ 4(1) ರಲ್ಲಿ ಕೆಳಕಂಡ ಅನುಸೂಚಿಯಲ್ಲಿ ನಮೂದಿಸಿರುವ ವಿಸ್ತೀರ್ಣವನ್ನು ರದ್ದುಪಡಿಸಲು ರದ್ದಿಯಾತಿ ಅಧಿಸೂಚನೆ ಹೊರಡಿಸಿರುವುದಾಗಿ ಈ ಮೂಲಕ ಪ್ರಕಟಿಸಲಾಗಿದೆ.

**ಅನುಸೂಚಿ**

**ಜಿಲ್ಲೆ:** ತುಮಕೂರು **ತಾಲ್ಲೂಕು:** ತುಮಕೂರು

**ಹೋಬಳಿ:** ಊರ್ಡಿಗೆರೆ **ಗ್ರಾಮ:** ಕ್ಯಾತ್ಸಂದ್ರ

| ಕಲಂ 4(1)ರ ಅಧಿಸೂಚನೆಯ ಕ್ರ.ಸಂ. | ಖಾತೆದಾರರ ಹೆಸರು | ಅನುಭವದಾರರು | ಸ.ನಂ. | ವಿಸ್ತೀರ್ಣ | ಆಕಾರ |
|---|---|---|---|---|---|
| 1 | ಎನ್.ಎಲ್. ವಾಸುದೇವ ಬಿನ್ ಎಂ.ಆರ್. ಲಕ್ಷ್ಮಿನಾರಾಯಣಪ್ಪ | ಎನ್.ಎಲ್. ವಾಸುದೇವ | 65/1 | 0–02 | 0–06 |

ಜಿಲ್ಲಾಧಿಕಾರಿಗಳು,

ಪಿ.ಆರ್. 63

ತುಮಕೂರು ಜಿಲ್ಲೆ, ತುಮಕೂರು.

**ಜಿಲ್ಲಾಧಿಕಾರಿಗಳವರ ಕಾರ್ಯಾಲಯ, ರಾಮನಗರ ಜಿಲ್ಲೆ, ರಾಮನಗರ**
**ಭೂ ಅರ್ಜನೆ ಅಧಿನಿಯಮದ 4(1) ನೇ ಪ್ರಕರಣದ ಮೇರೆಗಿನ ಅಧಿಸೂಚನೆ**
**ಕ್ರಮಾಂಕ:ರಾಜಿಕಾಎ2.ಎಲ್‌ಎಕ್ಯೂ.ಎಸ್‌ಆರ್.70:07–08, ದಿನಾಂಕ: 2ನೇ ಜನವರಿ 2009**

ಇದರ ಅನುಸೂಚಿಯಲ್ಲಿ ನಿರ್ದಿಷ್ಟ ಪಡಿಸಿದ ಭೂಮಿಗಳು ಸಾರ್ವಜನಿಕ ಉದ್ದೇಶಕ್ಕಾಗಿ ಎಂದರೆ ಗರಕಹಳ್ಳಿ ಏತ ನೀರಾವರಿ ಪೈಪ್‌ಲೈನ್ ಅಳವಡಿಸಲು ಭೂ ಸ್ವಾಧೀನಕ್ಕಾಗಿ ಜಮೀನು ಅಗತ್ಯವಾಗಲಿದೆಯೆಂದು ಕರ್ನಾಟಕ ಸರ್ಕಾರಕ್ಕೆ ಕಂಡುಬಂದಿರುವುದರಿಂದ ಕರ್ನಾಟಕ ಅಧಿನಿಯಮ ಸಂಖ್ಯೆ 33 ರ ಮೂಲಕ ತಿದ್ದುಪಡಿಯಾದ 1991ನೇ ಸಾಲಿನ ಭೂಸ್ವಾಧೀನ ಅಧಿನಿಯಮ ಸಂಖ್ಯೆ 1894ರ (ಕೇಂದ್ರ ಅಧಿನಿಯಮ ಸಂಖ್ಯೆ 1894ರ 1) ರ 4ನೇ ಪ್ರಕರಣದ (1) ನೇ ಉಪ ಪ್ರಕರಣದ ಉಪ ಬಂಧಗಳ ಅನುಸಾರವಾಗಿ ಅದಕ್ಕೆ ಸಂಬಂಧಪಟ್ಟ ಎಲ್ಲರಿಗೂ ಈ ಬಗ್ಗೆ ಈ ಮೂಲಕ ನೋಟೀಸನ್ನು ಕೊಡಲಾಗಿದೆ. ಹಾಗೂ ಕರ್ನಾಟಕ ಸರ್ಕಾರವು ಆ ಅಧಿನಿಯಮದ 4(2)ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಲು, ವಿಶೇಷ ಭೂ ಅರ್ಜನೆ ಅಧಿಕಾರಿ ಅವರ ಸಿಬ್ಬಂದಿ ಹಾಗೂ ಕೆಲಸಗಾರರಿಗೆ ಈ ಮೂಲಕ ಅಧಿಕಾರ ನೀಡುತ್ತದೆ.

ಸದರಿ ಅಧಿನಿಯಮದ 3(ಸಿ) ಪ್ರಕರಣದ ಮೇರೆಗೆ ಕರ್ನಾಟಕ ಸರ್ಕಾರವು ಅಧಿನಿಯಮದ 5ಎ ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸಲು ವಿಶೇಷ ಭೂಸ್ವಾಧೀನಾಧಿಕಾರಿಗಳು, ರಾಮನಗರ ಉಪವಿಭಾಗ, ರಾಮನಗರ ಇವರನ್ನು ನೇಮಕ ಮಾಡಿದೆ.

ಭೂಮಿಗಳಲ್ಲಿ ಹಿತಾಸಕ್ತಿ ಹೊಂದಿರುವ ಯಾವನೇ ವ್ಯಕ್ತಿಯು ತನ್ನ ಆಕ್ಷೇಪಣೆಗಳು ಯಾವುದಾದರೂ ಇದ್ದರೆ ಅವುಗಳನ್ನು ಅಧಿಸೂಚನೆಯು ಪ್ರಕಟವಾದ ತಾರೀಖಿನಿಂದ ಮೂವತ್ತು ದಿನಗಳ ಅವಧಿಯೊಳಗೆ ಅಥವಾ ಅದಕ್ಕೆ ಮುಂಚೆ ಕರ್ನಾಟಕ ಅಧಿನಿಯಮ 1991ರ 33ರ ಮೂಲಕ ತಿದ್ದುಪಡಿಯಾದ ಭೂ ಅರ್ಜನೆ ಅಧಿನಿಯಮ, 1894 ರ 3(ಸಿ) ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸಲು ನೇಮಕವಾದ ವಿಶೇಷ ಭೂಸ್ವಾಧೀನಾಧಿಕಾರಿಗಳು, ರಾಮನಗರ ಉಪವಿಭಾಗ, ರಾಮನಗರ ಇವರಿಗೆ ಲಿಖಿತದಲ್ಲಿ ಸಲ್ಲಿಸಬಹುದು.

ಸದರಿ ಅರ್ಜನೆ ಉದ್ದೇಶಕ್ಕಾಗಿ ಸದರಿ ಭೂಮಿಗಳ ಮೇಲೆ ನಿಯೋಜಿತರಾದ ಯಾವುದೇ ಮೋಜಣಿದಾರ ಅಥವಾ ಇತರೆ ವ್ಯಕ್ತಿಗಳಿಗೆ ಅಡ್ಡಿಯನ್ನುಂಟು ಮಾಡಬಾರದೆಂದು ಅಥವಾ ಅವರ ಕಾರ್ಯದಲ್ಲಿ ಹಸ್ತಕ್ಷೇಪ ಮಾಡಬಾರದೆಂದು ಸದರಿ ಭೂಮಿಗಳಲ್ಲಿ ಹಿತಾಸಕ್ತಿ ಹೊಂದಿರುವ ಎಲ್ಲಾ ವ್ಯಕ್ತಿಗಳಿಗೆ ಈ ಮೂಲಕ ಎಚ್ಚರಿಕೆ ನೀಡಲಾಗಿದೆ. ಈ ಅಧಿಸೂಚನೆಯು ಪ್ರಕಟವಾದ ದಿನಾಂಕದ ನಂತರ ಜಿಲ್ಲಾಧಿಕಾರಿಗಳು ರಾಮನಗರ ಜಿಲ್ಲೆ ರಾಮನಗರ ರವರ ಅನುಮತಿಯಿಲ್ಲದೆ ಮಾರಾಟ, ಗುತ್ತಿಗೆ, ಅಡಮಾನ, ವಿನಿಮಯದ ಮೂಲಕ ಅಥವಾ ಬೇರೆ ರೀತಿಯ ಮೂಲಕ ಸದರಿ ಭೂಮಿಗಳ ವಿಲೇಗಾಗಿ ಮಾಡಿಕೊಂಡ ಯಾವುದೇ ಕರಾರುಗಳನ್ನು ಅಥವಾ ಅದರಲ್ಲಿ ಮಾಡಲಾದ ವೆಚ್ಚ ಅಥವಾ ಅಭಿವೃದ್ಧಿಗಳನ್ನು ಅಂತಿಮವಾಗಿ ಅರ್ಜನೆ ಮಾಡಿಕೊಳ್ಳಲಾಗುವ ಸದರಿ ಭೂಮಿಗಳ ಅಂತಹ ಭಾಗಗಳಿಗೆ ಪರಿಹಾರಕ್ಕಾಗಿ ನಿರ್ಧರಣೆ ಮಾಡುವ ಅಧಿಕಾರಿಯ ಸದರಿ ಅಧಿನಿಯಮದ (ಏಳನೇ ಖಂಡದ) 2ನೇ ಪ್ರಕರಣದ ಮೇರೆಗೆ ಗಣನೆಗೆ ತೆಗೆದುಕೊಳ್ಳಬಾರದು,

ವಿಶೇಷ ಭೂಸ್ವಾಧೀನಾಧಿಕಾರಿಗಳು, ರಾಮನಗರ ಉಪವಿಭಾಗ, ರಾಮನಗರ ರವರ ಕಛೇರಿಯಲ್ಲಿ ಭೂಮಿಗಳ ಸ್ಥೂಲ ನಕಾಶೆಯನ್ನು ಪರಿಶೀಲನೆಗಾಗಿ ಇಡಲಾಗಿದೆ. ಎಲ್‌ಎಕ್ಯೂ.ಎಸ್‌ಆರ್.10.07–08.

**ಅನುಸೂಚಿ**

**ಜಿಲ್ಲೆ:**ರಾಮನಗರ **ತಾಲ್ಲೂಕು:**ಚನ್ನಪಟ್ಟಣ **ಹೋಬಳಿ:**ವಿರೂಪಾಕ್ಷಿಪುರ **ಗ್ರಾಮ:**ಇಗ್ಗಲೂರು

| ಕ್ರ. ಸಂ. | ಖಾತೆದಾರರ ಮತ್ತು ಅನುಭವದಾರರ ಹೆಸರು | ಸ.ನಂ. | ತರಹೆ | ವಿಸ್ತೀರ್ಣ ಎ.ಗುಂ |
|---|---|---|---|---|
| 1 | ತಿಮ್ಮೇಗೌಡ ಬಿನ್ ತಿಮ್ಮೇಗೌಡ | 56 | ಖುಷ್ಕಿ | 0–08 |
| 2 | ಲಿಂಗೇಗೌಡ ಬಿನ್ ಮೋಟೇಗೌಡ, ಚಿಕ್ಕಹೈದೇಗೌಡ | 100:1 | ಖುಷ್ಕಿ | 0–04 |

| ಕ್ರ. ಸಂ. | ಖಾತೆದಾರರ ಮತ್ತು ಅನುಭವದಾರರ ಹೆಸರು | ಸ.ನಂ. | ತರಹೆ | ವಿಸ್ತೀರ್ಣ ಎ.ಗುಂ |
|---|---|---|---|---|
| 3 | ಚಿಕ್ಕಸಿದ್ದೇಗೌಡ | 107:6 | ಖುಷ್ಕಿ | 0–04 |
| 4 | ಚನ್ನೇಗೌಡ | 108:1 | ಖುಷ್ಕಿ | 0–04 |
| 5 | ಮರಿಸಿದ್ದೇಗೌಡ ಬಿನ್ ಮರಿಸಿದ್ದೇಗೌಡ | 109:1 | ಖುಷ್ಕಿ | 0–02 |
| 6 | ಹುಚ್ಚೇಗೌಡ ಬಿನ್ ಮೊಳೇಗೌಡ | 102:3 | ಖುಷ್ಕಿ | 0–03 |
| 7 | ಕರೀಗೌಡ ಬಿನ್ ಗುಂಡೇಗೌಡ, ಸಿದ್ದಪ್ಪ ಬಿನ್ ಸಿದ್ದೇಗೌಡ | 456 | ಖುಷ್ಕಿ | 0–03 |
| 8 | ಲಿಂಗೇಗೌಡ್ರ, ತಮ್ಮಯ್ಯ ಬಿನ್ ಜೋಗಯ್ಯ | 93:5 | ಖುಷ್ಕಿ | 0–07 |
| 9 | ಸಿ.ಸಿದ್ದೇಗೌಡ, ಮಾದೇಗೌಡ, ಸಿದ್ದೇಗೌಡ | 471 | ಖುಷ್ಕಿ | 0–18 |
| 10 | ಚಿಕ್ಕಸಿದ್ದೇಗೌಡ ಬಿನ್ ಜೋಗಯ್ಯ | 93:9 | ಖುಷ್ಕಿ | 0–04 |
| 11 | ಸಿದ್ದಪ್ಪ ಬಿನ್ ಕರೀಗೌಡ | 93:11 | ಖುಷ್ಕಿ | 0–07 |
| 12 | ಸುಬ್ಬಮ್ಮ, ಲಿಂಗಯ್ಯ | 93:15 | ಖುಷ್ಕಿ | 0–07 |
| 13 | ಸಾವಿತ್ರಮ್ಮ, ಅಣ್ಣಪ್ಪ | 164:6 | ಖುಷ್ಕಿ | 0–05 |
| | | | | **2–16** |

ಜಿಲ್ಲಾಧಿಕಾರಿಗಳು
ರಾಮನಗರ ಜಿಲ್ಲೆ, ರಾಮನಗರ

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ರಾಮನಗರ ಜಿಲ್ಲೆ, ರಾಮನಗರ.**

**ಭೂ ಅರ್ಜನೆ ಅಧಿನಿಯಮದ 4(1)ನೇ ಪ್ರಕರಣದ ಮೇರೆಗಿನ ಅಧಿಸೂಚನೆ**

**ಕ್ರಮಾಂಕ:ರಾಜಿಕಾಎ2.ಎಲ್ಎಕ್ಯೂ.ಎಸ್ಆರ್:70/07–08, ದಿನಾಂಕ: 2ನೇ ಜನವರಿ 2009**

ಇದರ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಭೂಮಿಗಳು ಸಾರ್ವಜನಿಕ ಉದ್ದೇಶಕ್ಕಾಗಿ ಎಂದರೆ ಗರಕಹಳ್ಳಿ ಏತ ನೀರಾವರಿ ಪೈಪ್‌ಲೈನ್ ಅಳವಡಿಸಲು ಭೂ ಸ್ವಾಧೀನಕ್ಕಾಗಿ ಜಮೀನು ಅಗತ್ಯವಾಗಲಿದೆಯೆಂದು ಕರ್ನಾಟಕ ಸರ್ಕಾರಕ್ಕೆ ಕಂಡು ಬಂದಿರುವುದರಿಂದ:

ಕರ್ನಾಟಕ ಅಧಿನಿಯಮ ಸಂಖ್ಯೆ 33ರ ಮೂಲಕ ತಿದ್ದುಪಡಿಯಾದ 1991ನೇ ಸಾಲಿನ ಭೂಸ್ವಾಧೀನ ಅಧಿನಿಯಮ ಸಂಖ್ಯೆ 1894 (ಕೇಂದ್ರ ಅಧಿನಿಯಮ ಸಂಖ್ಯೆ 1894ರ 1)ರ 4ನೇ ಪ್ರಕರಣದ (1)ನೇ ಉಪ ಪ್ರಕರಣದ ಉಪಬಂಧಗಳ ಅನುಸಾರವಾಗಿ, ಅದಕ್ಕೆ ಸಂಬಂಧಪಟ್ಟ ಎಲ್ಲರಿಗೂ ಆ ಬಗ್ಗೆ ಈ ಮೂಲಕ ನೋಟೀಸನ್ನು ಕೊಡಲಾಗಿದೆ. ಹಾಗೂ ಕರ್ನಾಟಕ ಸರ್ಕಾರವು ಆ ಅಧಿನಿಯಮದ 4(2)ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಲು ವಿಶೇಷ ಭೂ ಅರ್ಜನೆ ಅಧಿಕಾರಿ, ಅವರ ಸಿಬ್ಬಂದಿ ಹಾಗೂ ಕೆಲಸಗಾರರಿಗೆ ಈ ಮೂಲಕ ಅಧಿಕಾರ ನೀಡುತ್ತದೆ.

ಸದರಿ ಅಧಿನಿಯಮದ 3(ಸಿ) ಪ್ರಕರಣದ ಮೇರೆಗೆ ಕರ್ನಾಟಕ ಸರ್ಕಾರವು ಅಧಿನಿಯಮದ 5(ಎ) ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸಲು ವಿಶೇಷ ಭೂಸ್ವಾಧೀನಾಧಿಕಾರಿಗಳು, ರಾಮನಗರ ಉಪ ವಿಭಾಗ, ರಾಮನಗರ ಇವರನ್ನು ನೇಮಕ ಮಾಡಿದೆ.

ಭೂಮಿಗಳಲ್ಲಿ ಹಿತಾಸಕ್ತಿ ಹೊಂದಿರುವ ಯಾವನೇ ವ್ಯಕ್ತಿಯು ತನ್ನ ಆಕ್ಷೇಪಣೆಗಳು ಯಾವುದಾದರೂ ಇದ್ದರೆ, ಅವುಗಳನ್ನು ಅಧಿಸೂಚನೆಯು ಪ್ರಕಟವಾದ ತಾರೀಖಿನಿಂದ ಮೂವತ್ತು ದಿನಗಳ ಅವಧಿಯೊಳಗೆ ಅಥವಾ ಅದಕ್ಕೆ ಮುಂಚೆ, ಕರ್ನಾಟಕ ಅಧಿನಿಯಮ 1961ರ 17ರ ಮೂಲಕ ತಿದ್ದುಪಡಿಯಾದ ಭೂ ಅರ್ಜನೆ ಅಧಿನಿಯಮ 1894ರ 3(ಸಿ) ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸಲು ನೇಮಕವಾದ ವಿಶೇಷ ಭೂಸ್ವಾಧೀನಾಧಿಕಾರಿಗಳು, ರಾಮನಗರ ಉಪ ವಿಭಾಗ, ರಾಮನಗರ ಇವರಿಗೆ ಲಿಖಿತದಲ್ಲಿ ಸಲ್ಲಿಸಬಹುದು.

ಸದರಿ ಅರ್ಜನೆ ಉದ್ದೇಶಕ್ಕಾಗಿ ಸದರಿ ಭೂಮಿಗಳ ಮೇಲೆ ನಿಯೋಜಿತರಾದ ಯಾವುದೇ ಮೋಜಣಿದಾರ ಅಥವಾ ಇತರೆ ವ್ಯಕ್ತಿಗಳಿಗೆ ಅಡ್ಡಿಯನ್ನುಂಟು ಮಾಡಬಾರದೆಂದು ಅಥವಾ ಅವರ ಕಾರ್ಯದಲ್ಲಿ ಹಸ್ತಕ್ಷೇಪ ಮಾಡಬಾರದೆಂದು ಸದರಿ ಭೂಮಿಗಳಲ್ಲಿ ಹಿತಾಸಕ್ತಿ ಹೊಂದಿರುವ ಎಲ್ಲಾ ವ್ಯಕ್ತಿಗಳಿಗೆ ಈ ಮೂಲಕ ಎಚ್ಚರಿಕೆ ನೀಡಲಾಗಿದೆ. ಈ ಅಧಿಸೂಚನೆಯು ಪ್ರಕಟವಾದ ದಿನಾಂಕದ ನಂತರ ಜಿಲ್ಲಾಧಿಕಾರಿಗಳು, ರಾಮನಗರ ಜಿಲ್ಲೆ, ರಾಮನಗರ ರವರ ಅನುಮತಿಯಿಲ್ಲದೆ, ಮಾರಾಟ, ಗುತ್ತಿಗೆ, ಅಡಮಾನ, ವಿನಿಮಯದ ಮೂಲಕ ಅಥವಾ ಬೇರೆ ರೀತಿಯ ಮೂಲಕ ಸದರಿ ಭೂಮಿಗಳ ವಿಲೇಗಾಗಿ ಮಾಡಿಕೊಂಡ ಯಾವುದೇ ಕರಾರುಗಳನ್ನು ಅಥವಾ ಅದರಲ್ಲಿ ಮಾಡಲಾದ ವೆಚ್ಚ ಅಥವಾ ಅಭಿವೃದ್ಧಿಗಳನ್ನು ಅಂತಿಮವಾಗಿ ಅರ್ಜನೆ ಮಾಡಿಕೊಳ್ಳಲಾಗುವ ಸದರಿ ಭೂಮಿಗಳಿಗೆ ಅಂತಹ ಭಾಗಗಳ ಪರಿಹಾರಕ್ಕಾಗಿ ನಿರ್ಧರಣೆ ಮಾಡುವ ಅಧಿಕಾರಿಯು ಸದರಿ ಅಧಿನಿಯಮದ (ಏಳನೇ ಖಂಡದ) 2ನೇ ಪ್ರಕರಣದ ಮೇರೆಗೆ ಗಣನೆಗೆ ತೆಗೆದುಕೊಳ್ಳಬಾರದು.

ವಿಶೇಷ ಭೂಸ್ವಾಧೀನಾಧಿಕಾರಿಗಳು, ರಾಮನಗರ ಉಪ ವಿಭಾಗ, ರಾಮನಗರ ಕಛೇರಿಯಲ್ಲಿ ಭೂಮಿಗಳ ಸ್ಥೂಲ ನಕಾಶೆಯನ್ನು ಪರಿಶೀಲನೆಗಾಗಿ ಇಡಲಾಗಿದೆ (LAQ.SR. 10:07-08)

**ಅನುಸೂಚಿ**

**ಜಿಲ್ಲೆ:** ರಾಮನಗರ **ತಾಲ್ಲೂಕು:** ಚನ್ನಪಟ್ಟಣ **ಹೋಬಳಿ:** ವಿರೂಪಾಕ್ಷಿಪುರ **ಗ್ರಾಮ:** ಇಗ್ಗಲೂರು

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ.ನಂ. | ತರಹೆ | ಚಕ್ಕುಬಂದಿ | | | | ಅಗತ್ಯವಾದ ಅಂದಾಜು | ಮೌಲ್ಯ ನಿರ್ಧರಣೆ |
|---|---|---|---|---|---|---|---|---|---|---|
| | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | ವಿಸ್ತೀರ್ಣ ಎ.ಗುಂ | ಕಂದಾಯ ರೂ. ಪೈ |
| 1 | ತಿಮ್ಮೇಗೌಡ ಬಿನ್ ತಿಮ್ಮೇಗೌಡ | ತಿಮ್ಮೇಗೌಡ | 56 | ಖುಷ್ಕಿ | ಉಳಿಕೆ | 84 | 95 | ಉಳಿಕೆ | 0–08 | 0–06 |
| 2 | ಲಿಂಗೇಗೌಡ ಬಿನ್ ಮೋಟೇಗೌಡ, ಚಿಕ್ಕಹೈದೇಗೌಡ | ಲಿಂಗೇಗೌಡ, ಚಿಕ್ಕಹೈದೇಗೌಡ | 100:1 | ಖುಷ್ಕಿ | 100:3 | ಉಳಿಕೆ | ಉಳಿಕೆ | 100 | 0–04 | 0–08 |
| 3 | ಚಿಕ್ಕಸಿದ್ದೇಗೌಡ | ಚಿಕ್ಕಸಿದ್ದೇಗೌಡ | 107:6 | ಖುಷ್ಕಿ | ಉಳಿಕೆ | ಉಳಿಕೆ | 108 | ಹಳ್ಳ | 0–04 | 0–22 |
| 4 | ಚನ್ನೇಗೌಡ | ಚನ್ನೇಗೌಡ | 108:1 | ಖುಷ್ಕಿ | ಉಳಿಕೆ | ಓಣಿ | 108 | ಕಟ್ಟೆ | 0–04 | 0–08 |
| 5 | ಮರಿಸಿದ್ದೇಗೌಡ ಬಿನ್ ಮರಿಸಿದ್ದೇಗೌಡ | ಮರಿಸಿದ್ದೇಗೌಡ | 109:1 | ಖುಷ್ಕಿ | ಉಳಿಕೆ | 471 | ಕಟ್ಟೆ | ಓಣಿ | 0–02 | 0–06 |
| 6 | ಹುಚ್ಚೇಗೌಡ ಬಿನ್ ಮೊಳೇಗೌಡ | ಹುಚ್ಚೇಗೌಡ | 102:3 | ಖುಷ್ಕಿ | ಉಳಿಕೆ | 102:2 | 102:2 | 102:2 | 0–03 | 0–09 |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ.ನಂ. | ತರಹೆ | ಚಕ್ಕುಬಂದಿ | | | | ಅಗತ್ಯವಾದ ಅಂದಾಜು | ಮೌಲ್ಯ ನಿರ್ಧರಣೆ |
|---|---|---|---|---|---|---|---|---|---|---|
| | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | ವಿಸ್ತೀರ್ಣ ಎ.ಗುಂ | ಕಂದಾಯ ರೂ. ಪೈ |
| 7 | ಕರಿಗೌಡ ಬಿನ್ ಗುಂಡೇಗೌಡ, ಸಿದ್ದಪ್ಪ ಬಿನ್ ಸಿದ್ದೇಗೌಡ | ಕರಿಗೌಡ, ಸಿದ್ದಪ್ಪ | 456 | ಖುಷ್ಕಿ | ಉಳಿಕೆ | ಉಳಿಕೆ | ಹಳ್ಳ | 463 | 0–03 | 0–09 |
| 8 | ಲಿಂಗೇಗೌಡ ತಮ್ಮಯ್ಯ ಬಿನ್ ಜೋಗಯ್ಯ | ಲಿಂಗೇಗೌಡ, ತಮ್ಮಯ್ಯ | 93:5 | ಖುಷ್ಕಿ | ಬ್ಲಾಕ್ 9 | ಬ್ಲಾಕ್ 13, 14, 15 | ಹಳ್ಳ | 95 | 0–07 | 0–15 |
| 9 | ಸಿ. ಸಿದ್ದೇಗೌಡ, ಮಾದೇಗೌಡ, ಸಿದ್ದೇಗೌಡ | ಸಿದ್ದೇಗೌಡ, ಮಾದೇಗೌಡ | 471 | ಖುಷ್ಕಿ | ಉಳಿಕೆ | ಉಳಿಕೆ | ಓಣಿ | 108:1 | 0–18 | 0–36 |
| 10 | ಚಿಕ್ಕಸಿದ್ದೇಗೌಡ ಬಿನ್ ಜೋಗಯ್ಯ | ಚಿಕ್ಕಸಿದ್ದೇಗೌಡ | 93:9 | ಖುಷ್ಕಿ | ಬ್ಲಾಕ್ 8 | 14:12 | ಹಳ್ಳ | 95 | 0–04 | 0–28 |
| 11 | ಸಿದ್ದಪ್ಪ ಬಿನ್ ಕರೀಗೌಡ | ಸಿದ್ದಪ್ಪ | 93:11 | ಖುಷ್ಕಿ | ಉಳಿಕೆ | ಬ್ಲಾಕ್ 12 | ಉಳಿಕೆ | ಉಳಿಕೆ | 0–07 | 0–15 |
| 12 | ಸುಬ್ಬಮ್ಮ, ಲಿಂಗಯ್ಯ, | ಸುಬ್ಬಮ್ಮ ಲಿಂಗಯ್ಯ | 93:15 | ಖುಷ್ಕಿ | ಉಳಿಕೆ | ಉಳಿಕೆ | ಗಡಿ | ಉಳಿಕೆ | 0–07 | 0–30 |
| 13 | ಸಾವಿತ್ರಮ್ಮ, ಅಣ್ಣಪ್ಪ | ಸಾವಿತ್ರಮ್ಮ, ಅಣ್ಣಪ್ಪ | 164:6 | ಖುಷ್ಕಿ | ಉಳಿಕೆ | ಉಳಿಕೆ | ರಸ್ತೆ | 458 | 0–05 | 0–10 |
| | | | | | | | | | **2–16** | |

ಜಿಲ್ಲಾಧಿಕಾರಿಗಳು,
ರಾಮನಗರ ಜಿಲ್ಲೆ, ರಾಮನಗರ.

ಪಿ.ಆರ್. 61

**ಜಿಲ್ಲಾಧಿಕಾರಿಗಳವರ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು.**

**ಭೂ ಅರ್ಜನೆ ಅಧಿನಿಯಮ 4(1) ನೇ ಪ್ರಕರಣದ ಮೇರೆಗೆ ಅಧಿಸೂಚನೆ.**

**ಕ್ರಮಾಂಕ: ಎಲ್ಎಕ್ಯೂ:ಎಸ್ಆರ್:43/08–09, ದಿನಾಂಕ: 2ನೇ ಜನವರಿ 2009**

ಇದರ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಭೂಮಿಗಳು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಶಿರಾ ಚಿಕ್ಕಕೆರೆಗೆ ಆಶ್ರಯಿಸಿರುವ ಸ.ನಂ.ಗಳ ಜಮೀನಿಗೆ ನೀರು ಹಾಯಿಸಲು ಕಾಲುವೆ ನಿರ್ಮಾಣಕ್ಕಾಗಿ ಅಗತ್ಯವಾಗಿದೆಯೆಂದು ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು ಇವರಿಗೆ ಕಂಡು ಬಂದಿರುವುದರಿಂದ ಕರ್ನಾಟಕ ಕಾಯಿದೆ 33:1991 ರ ಅನ್ವಯ ತಿದ್ದುಪಡಿಯಾದ ಕೇಂದ್ರ ಅಧಿನಿಯಮ 1894 ರ 4ನೇ ಪ್ರಕರಣದ (1) ನೇ ಉಪಪ್ರಕರಣದ ಅನುಸಾರವಾಗಿ ಅದಕ್ಕೆ ಸಂಬಂಧಪಟ್ಟ ಎಲ್ಲರಿಗೂ ಆ ಬಗ್ಗೆ ಈ ಮೂಲಕ ನೋಟೀಸುಗಳನ್ನು ಕೊಡಲಾಗಿದೆ. ಹಾಗೂ ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು ರವರು ಅಧಿನಿಯಮದ 4(2) ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಲು ಉಪವಿಭಾಗಾಧಿಕಾರಿಗಳು ಹಾಗೂ ಭೂಸ್ವಾಧೀನಾಧಿಕಾರಿಗಳು ಮಧುಗಿರಿ ಉಪ ವಿಭಾಗ, ಮಧುಗಿರಿ ಹಾಗೂ ಅವರ ಸಿಬ್ಬಂದಿ ಮತ್ತು ಕೆಲಸಗಾರರಿಗೆ ಈ ಮೂಲಕ ಅಧಿಕಾರ ನೀಡಿರುತ್ತಾರೆ.

ಸದರಿ ಅಧಿನಿಯಮದ 3(ಸಿ) ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು ರವರು ಅಧಿನಿಯಮ 5ಎ ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸಲು ಉಪವಿಭಾಗಾಧಿಕಾರಿಗಳು, ಮಧುಗಿರಿ ಇವರನ್ನು ನೇಮಕ ಮಾಡಿರುತ್ತಾರೆ.

ಭೂಮಿಗಳಲ್ಲಿ ಹಿತಾಸಕ್ತಿ ಹೊಂದಿರುವ ಯಾವುದೇ ವ್ಯಕ್ತಿಯು ತನ್ನ ಆಕ್ಷೇಪಣೆಗಳು ಯಾವುದಾದರೂ ಇದ್ದರೆ ಅವುಗಳನ್ನು ಈ ಅಧಿಸೂಚನೆ ಪ್ರಕಟಗೊಂಡ ತಾರೀಖಿನಿಂದ 30 ದಿನಗಳ ಒಳಗಾಗಿ ಅಥವಾ ಅದಕ್ಕೆ ಮುಂಚೆ ಕರ್ನಾಟಕ ಕಾಯಿದೆ 33:1991 ರನ್ವಯ ತಿದ್ದುಪಡಿಯಾದ ಭೂ ಅರ್ಜನೆ ಕೇಂದ್ರ ಅಧಿನಿಯಮ 1894 ರ (ಸಿ) ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸಲು ಉಪವಿಭಾಗಾಧಿಕಾರಿಗಳು, ಮಧುಗಿರಿ ಇವರಿಗೆ ಲಿಖಿತವಾಗಿ ಸಲ್ಲಿಸಬಹುದು.

ಭೂಅರ್ಜನೆ ಉದ್ದೇಶಕ್ಕಾಗಿ ಘೋಷಿತ ಭೂಮಿಗಳ ಮೇಲೆ ನಿಯೋಜಿತರಾದ ಯಾವನೇ ಮೋಜಣಿದಾರ ಅಥವಾ ಇತರೆ ವ್ಯಕ್ತಿಗಳಿಗೆ ಅಡ್ಡಿಯನ್ನುಂಟು ಮಾಡಬಾರದೆಂದು ಪ್ರಕಟಿತ ಭೂಮಿಗಳಲ್ಲಿ ಹಿತಾಸಕ್ತಿ ಹೊಂದಿರುವ ಎಲ್ಲಾ ವ್ಯಕ್ತಿಗಳಿಗೆ ಈ ಮೂಲಕ ಎಚ್ಚರಿಕೆ ನೀಡಲಾಗಿದೆ. ಈ ಅಧಿಸೂಚನೆಯು ಪ್ರಕಟವಾದ ದಿನಾಂಕದ ನಂತರ ತುಮಕೂರು ಜಿಲ್ಲೆಯ ಜಿಲ್ಲಾಧಿಕಾರಿಯವರ ಅನುಮತಿಯಿಲ್ಲದೆ ಮಾರಾಟ, ಗುತ್ತಿಗೆ, ಅಡಮಾನ ವಿನಿಮಯದ ಮೂಲಕ ಅಥವಾ ಬೇರೆ ರೀತಿಯ ಮೂಲಕ ಪ್ರಕಟಿತ ಭೂಮಿಗಳ ವಿಲೇಗಾಗಿ ಮಾಡಿಕೊಂಡ ಯಾವುದೇ ಕರಾರುಗಳನ್ನು ಅಥವಾ ಅದರಲ್ಲಿ ಮಾಡಲಾದ ವೆಚ್ಚ ಅಥವಾ ಅಭಿವೃದ್ಧಿಗಳನ್ನು ಅಂತಿಮವಾಗಿ ಅರ್ಜನೆ ಮಾಡಿಕೊಳ್ಳಲಾಗುವ ಭೂಮಿಗಳ ಅಂತಹ ಭಾಗಗಳಿಗೆ ಪರಿಹಾರಕ್ಕಾಗಿ ನಿರ್ಧರಣೆ ಮಾಡುವ ಅಧಿಕಾರಿಯು ಭೂ ಅರ್ಜನೆ ಅಧಿನಿಯಮದ (7ನೇ ಖಂಡದ) 2ನೇ ಪ್ರಕರಣದ ಮೇರೆಗೆ ಗಣನೆಗೆ ತೆಗೆದುಕೊಳ್ಳಬಾರದು.

ಉಪವಿಭಾಗಾಧಿಕಾರಿಗಳು ಹಾಗೂ ಭೂಸ್ವಾಧೀನಾಧಿಕಾರಿಗಳು ಮಧುಗಿರಿ ಉಪ ವಿಭಾಗ, ಮಧುಗಿರಿ ಇವರ ಕಛೇರಿಯಲ್ಲಿ ಭೂಮಿಗಳ ಸ್ಥೂಲ ನಕ್ಷೆಯನ್ನು ಪರಿಶೀಲನೆಗೆ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ :** ತುಮಕೂರು **ತಾಲ್ಲೂಕು :** ಶಿರಾ **ಹೋಬಳಿ :** ಕಸಬಾ **ಗ್ರಾಮ :** ಶಿರಾ

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ | ತರಹೆ | ವಿಸ್ತೀರ್ಣ | ಆಕಾರ | ಚಕ್ಕುಬಂದಿ | | | |
|---|---|---|---|---|---|---|---|---|---|---|
| | | | | | ಎ–ಗುಂ | ರೂ. ಪೈ | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | 2 | 3 | 4 | 5 | 6 | 7 | 8ಎ | 8ಬಿ | 8ಸಿ | 8ಡಿ |
| 1. | ಬೋರಮ್ಮ ಕೋಂ ಹನುಮಂತಪ್ಪ ಪಿ.ಸಿ.ಶಿವಕುಮಾರ್ ಬಿನ್ ಲೇಟ್ ಪಡಿಕಾರ್ ಚನ್ನಪ್ಪ | ಬೋರಮ್ಮ ಕೋಂ ಹನುಮಂತಪ್ಪ | 114/2 | ತರಿ | 0–03 | – | ಸ.ನಂ.115/1 | ಸ.ನಂ.114/2ರ ಉಳಿಕೆ | ಸ.ನಂ.125/12 | ಕೆರೆ |

**ಡಾ. ಸಿ.ಸೋಮಶೇಖರ ಐ.ಎ.ಎಸ್.**
ಜಿಲ್ಲಾಧಿಕಾರಿಗಳು
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್. 62

**ಕಂದಾಯ ಸಚಿವಾಲಯ**

**ಭೂಸ್ವಾಧೀನ ಅಧಿನಿಯಮ ಕಲಂ 17 ರೊಂದಿಗೆ ಓದಲಾದಂತೆ ಕಲಂ 6(1) ರನ್ವಯ ಘೋಷಣೆ**

**ಕ್ರಮಾಂಕ: ಕಂಇ 18 ಭೂಸ್ವಾತು 2008, ದಿನಾಂಕ: 9ನೇ ಜನವರಿ 2009**

ಈ ಮೂಲಕ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಜಮೀನುಗಳು ಒಂದು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಯಶವಂತಪುರ – ತುಮಕೂರು ರೈಲ್ವೇ ಮಾರ್ಗವನ್ನು ಡಬಲ್ ಲೈನ್ ಆಗಿ ಪರಿವರ್ತಿಸಲು ರೈಲ್ವೇ ಇಲಾಖೆಗೆ ಅಗತ್ಯವಾಗಿದೆಯೆಂದು ಅಗತ್ಯವಾಗಿದೆ ಎಂದು ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರುರವರ ನಂ. ಎಲ್‌ಎಕ್ಯೂ ಎಸ್‌ಆರ್: 12/06–07 ದಿನಾಂಕ: 27.6.2008 ರಂತೆ ಹೊರಡಿಸಿರುವ ಭೂಸ್ವಾಧೀನ ಅಧಿನಿಯಮದ ಪ್ರಕರಣ 17(1) ಮತ್ತು 17(4) ರಲ್ಲಿ ಓದಲಾದಂತೆ 4(1) ರ ಅಧಿಸೂಚನೆಯಲ್ಲಿ ತಿಳಿಯಪಡಿಸಲಾಗಿದೆ. ಸದರಿ ಅಧಿಸೂಚನೆಯು ದಿನಾಂಕ: 31.7.2008ರ ಕರ್ನಾಟಕ ರಾಜ್ಯಪತ್ರದ ಭಾಗ 6, ಪುಟ 876–877 ರಲ್ಲಿ ಪ್ರಕಟವಾಗಿರುತ್ತದೆ.

1991ನೇ ಸಾಲಿನ ಕರ್ನಾಟಕ ಅಧಿನಿಯಮ 33 ರಲ್ಲಿ ತಿದ್ದುಪಡಿಯಾದ 1984ನೇ ಸಾಲಿನ ಭೂಸ್ವಾಧೀನ ಅಧಿನಿಯಮ (ಕೇಂದ್ರ ಅಧಿನಿಯಮ 1894 ರ (1) 6ನೇ ಪ್ರಕರಣದ ಮೇರೆಗೆ ಕೆಳಗೆ ಸೂಚಿಸಿರುವ ಜಮೀನುಗಳನ್ನು ಭೂಸ್ವಾಧೀನಪಡಿಸಿಕೊಳ್ಳಲು ಅಗತ್ಯವಿದೆಯೆಂದು ಸರ್ಕಾರಕ್ಕೆ ಮನದಟ್ಟಾಗಿರುವುದರಿಂದ ಮೇಲೆ ತಿಳಿಸಿದ ಉದ್ದೇಶಕ್ಕಾಗಿ ಜಮೀನು ಅಗತ್ಯವಾಗಿದೆಯೆಂದು

ಸದರಿ ಅಧಿನಿಯಮದ 6ನೇ ಪ್ರಕರಣದ ಮೇರೆಗೆ ಈ ಮೂಲಕ ಘೋಷಿಸಿದೆ. ಪ್ರಕರಣ 7ರ ಮತ್ತು 3 (ಸಿ) ಪ್ರಕಾರ ಹೊಂದಿರುವ ಅಧಿಕಾರದ ಮೇಲೆ ಉಪವಿಭಾಗಾಧಿಕಾರಿಗಳು ತುಮಕೂರು ಉಪವಿಭಾಗ, ತುಮಕೂರು ಇವರನ್ನು ಇನ್ನು ಮುಂದೆ ಕೈಗೊಳ್ಳುವ ವ್ಯವಹಾರಗಳನ್ನು ಕುರಿತಂತೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸಲು ನೇಮಿಸಲಾಗಿದೆ. ಮತ್ತು ಜಮೀನುಗಳನ್ನು ಸ್ವಾಧೀನಪಡಿಸಿಕೊಳ್ಳಲು ಆದೇಶ ನೀಡಲಾಗಿದೆ.

ಮೇಲ್ಕಂಡ ಅಧಿನಿಯಮ 17ನೇ ಪ್ರಕರಣದ (1) ಉಪ ಪ್ರಕರಣ (4)ರ ಪ್ರಕರಣದಲ್ಲಿರುವ ಅಧಿಕಾರದ ಮೇಲೆ ಸದರಿ ಅಧಿನಿಯಮದ ಪ್ರಕರಣ 9 ರಲ್ಲಿನ ಪ್ರಕರಣ 10ರ ಪ್ರಕಾರ ಹೊರಡಿಸಲಾಗುವ ತಿಳುವಳಿಕೆಯನ್ನು ಪ್ರಕಟಿಸಿದ ದಿನಾಂಕದಿಂದ 15 ದಿನಗಳು ಕಳೆದ ನಂತರ ಸದರಿ ಜಮೀನನ್ನು ಸ್ವಾಧೀನ ಪಡೆಯಲು ನಿರ್ದೇಶಿಸಿರುತ್ತದೆ.

ಸದರಿ ಭೂಮಿಗಳ ನಕಾಶೆಯನ್ನು ಪರಿವೀಕ್ಷಣೆಗಾಗಿ ಉಪವಿಭಾಗಾಧಿಕಾರಿಗಳು ಹಾಗೂ ಭೂಸ್ವಾಧೀನಾಧಿಕಾರಿಗಳು ತುಮಕೂರು ಉಪವಿಭಾಗ ತುಮಕೂರು ಇವರ ಕಛೇರಿಯಲ್ಲಿ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ:** ತುಮಕೂರು **ತಾಲ್ಲೂಕು:** ತುಮಕೂರು **ಹೋಬಳಿ:** ಊರ್ಡಿಗೆರೆ **ಗ್ರಾಮ:** ಹಿರೇಹಳ್ಳಿ ಮತ್ತು ಚಿಕ್ಕಹಳ್ಳಿ

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ.ನಂ. | ತರಹೆ | ಚಕ್ಕುಬಂದಿ | | | | ಭೂಸ್ವಾಧೀನ ವಿಸ್ತೀರ್ಣ | ಆಕಾರ ರೂ–ಪೈ |
|---|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | | |
| **ಹಿರೇಹಳ್ಳಿ** | | | | | | | | | | |
| 1 | ಮುದ್ವೀರಯ್ಯ ಬಿನ್ ವೀರಣ್ಣ, ಹುಚ್ಚೀರಯ್ಯ ಬಿನ್ ವೀರಣ್ಣ, ಸಿ.ವಿ. ಹೊಸಳ್ಳಯ್ಯ ಬಿನ್ ವೀರಣ್ಣ, ಶಿವಣ್ಣ ಬಿನ್ ವೀರಣ್ಣ | ಮುದ್ವೀರಯ್ಯ, ಹುಚ್ಚೀರಯ್ಯ, ಸಿ.ವಿ. ಹೊಸಳ್ಳಯ್ಯ, ಶಿವಣ್ಣ | 41/2 | ಖುಷ್ಕಿ | ಗಡಿ | ಸ.ನಂ. 41/3 ಅಶ್ವತ್ತ ಕಟ್ಟೆ | ಉಳಿಕೆ | ರೈಲ್ವೇ ರಸ್ತೆ | 0–14 | 0–35 |
| 2 | ಕೆ. ಜಯರಾಂ ಬಿನ್ ಕುಮಟಯ್ಯ | ಕೆ ಜಯರಾಂ | ಸ.ನಂ. 41/3 | ಖುಷ್ಕಿ | ಸ.ನಂ. 41/2 | ರೈಲ್ವೇ ರಸ್ತೆ | ಸ.ನಂ. 41/2 ರ ಉಳಿಕೆ | ರೈಲ್ವೇ ರಸ್ತೆ | 0–08 | 0–20 |
| | | | **ಒಟ್ಟು** | | | | | | **0–22** | **0–55** |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ.ನಂ. | ತರಹೆ | ಚಕ್ಕುಬಂದಿ | | | | ಭೂಸ್ವಾಧೀನ ವಿಸ್ತೀರ್ಣ | ಆಕಾರ ರೂ–ಪೈ |
|---|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | | |
| **ಚಿಕ್ಕಹಳ್ಳಿ** | | | | | | | | | | |
| 1 | ಸಿ.ಎಂ. ವೀರಬಸವಯ್ಯ ಬಿನ್ ಮುದ್ದಬಸಪ್ಪ, ಪಾರ್ವತಮ್ಮ ಕೋಂ ಪಿ.ಹೆಚ್. ರೇವಣ್ಣ | ಸಿ.ಎಂ. ವೀರಬಸವಯ್ಯ, ಪಾರ್ವತಮ್ಮ | ಸ.ನಂ. 69/3ಸಿ | ಖುಷ್ಕಿ ತರಿ | ಸ.ನಂ. 69/3 ಇ2 | ಗಡಿ | ಉಳಿಕೆ ಜಮೀನು | ರೈಲ್ವೇ ರಸ್ತೆ | 0–02 ಖು 0–04 ತ | 0–81 |
| 2 | ಜಿ.ಎನ್. ಗುರುಸಿದ್ದಪ್ಪ ಬಿನ್ ಲೇಟ್ ನಂಜಪ್ಪ | ಜಿ.ಎನ್. ಗುರುಸಿದ್ದಪ್ಪ | ಸ.ನಂ. 69/3ಇ | ಖುಷ್ಕಿ | ಊರು | ಸ.ನಂ. 69/3ಸಿ2 | ಉಳಿಕೆ ಜಮೀನು | ರೈಲ್ವೇ ರಸ್ತೆ | 0–22 | 0–55 |
| | | | | | | **ಒಟ್ಟು** | | | **0–28** | **0–84** |

**ಘೋಷ್ವಾರೆ**

| ಗ್ರಾಮ | ಖುಷ್ಕಿ ಎ–ಗುಂ | ತರಿ | ಒಟ್ಟು |
|---|---|---|---|
| ಹಿರೇಹಳ್ಳಿ | 0–22 | – | 0–22 |
| ಚಿಕ್ಕಹಳ್ಳಿ | 0–24 | 0–04 | 0–28 |
| **ಒಟ್ಟು** | **1–06** | **0–04** | **1–10** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಸ್ವಾಧೀನ–2)

**ಕಂದಾಯ ಸಚಿವಾಲಯ**

**ಭೂಸ್ವಾಧೀನ ಅಧಿನಿಯಮ ಕಲಂ 17 ರೊಂದಿಗೆ ಓದಲಾದಂತೆ ಕಲಂ 6(1) ರನ್ವಯ ಘೋಷಣೆ**

**ಕ್ರಮಾಂಕ: ಕಂಇ 18 ಭೂಸ್ವಾತು 2008, ದಿನಾಂಕ: 9ನೇ ಜನವರಿ 2009**

ಈ ಮೂಲಕ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಜಮೀನುಗಳು ಒಂದು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಯಶವಂತಪುರ – ತುಮಕೂರು ರೈಲ್ವೇ ಮಾರ್ಗವನ್ನು ಡಬಲ್ ಲೈನ್ ಆಗಿ ಪರಿವರ್ತಿಸಲು ರೈಲ್ವೇ ಇಲಾಖೆಗೆ ಅಗತ್ಯವಾಗಿದೆ ಎಂದು ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರುರವರ ನಂ. ಎಲ್ಎಕ್ಯೂ ಎಸ್ಆರ್: 12/06–07 ದಿನಾಂಕ: 27.6.2008

ರಂತೆ ಹೊರಡಿಸಿರುವ ಭೂಸ್ವಾಧೀನ ಅಧಿನಿಯಮದ ಪ್ರಕರಣ 17(1) ಮತ್ತು 17(4) ರಲ್ಲಿ ಓದಲಾದಂತೆ 4(1) ರ ಅಧಿಸೂಚನೆಯಲ್ಲಿ ತಿಳಿಯಪಡಿಸಲಾಗಿದೆ. ಸದರಿ ಅಧಿಸೂಚನೆಯು ದಿನಾಂಕ: 31.7.2008ರ ಕರ್ನಾಟಕ ರಾಜ್ಯಪತ್ರದ ಭಾಗ 6, ಪುಟ 876–877 ರಲ್ಲಿ ಪ್ರಕಟವಾಗಿರುತ್ತದೆ.

1991ನೇ ಸಾಲಿನ ಕರ್ನಾಟಕ ಅಧಿನಿಯಮ 33 ರಲ್ಲಿ ತಿದ್ದುಪಡಿಯಾದ 1984ನೇ ಸಾಲಿನ ಭೂಸ್ವಾಧೀನ ಅಧಿನಿಯಮ (ಕೇಂದ್ರ ಅಧಿನಿಯಮ 1894 ರ (1) 6ನೇ ಪ್ರಕರಣದ ಮೇರೆಗೆ ಕೆಳಗೆ ಸೂಚಿಸಿರುವ ಜಮೀನುಗಳನ್ನು ಭೂಸ್ವಾಧೀನಪಡಿಸಿಕೊಳ್ಳಲು ಅಗತ್ಯವಿದೆಯೆಂದು ಸರ್ಕಾರಕ್ಕೆ ಮನದಟ್ಟಾಗಿರುವುದರಿಂದ ಮೇಲೆ ತಿಳಿಸಿದ ಉದ್ದೇಶಕ್ಕಾಗಿ ಜಮೀನು ಅಗತ್ಯವಾಗಿದೆಯೆಂದು

ಸದರಿ ಅಧಿನಿಯಮದ 6ನೇ ಪ್ರಕರಣದ ಮೇರೆಗೆ ಈ ಮೂಲಕ ಘೋಷಿಸಿದೆ. ಪ್ರಕರಣ 7ರ ಮತ್ತು 3 (ಸಿ) ಪ್ರಕಾರ ಹೊಂದಿರುವ ಅಧಿಕಾರದ ಮೇಲೆ ಉಪವಿಭಾಗಾಧಿಕಾರಿಗಳು ತುಮಕೂರು ಉಪವಿಭಾಗ, ತುಮಕೂರು ಇವರನ್ನು ಇನ್ನು ಮುಂದೆ ಕೈಗೊಳ್ಳುವ ವ್ಯವಹಾರಗಳನ್ನು ಕುರಿತಂತೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸಲು ನೇಮಿಸಲಾಗಿದೆ. ಮತ್ತು ಜಮೀನುಗಳನ್ನು ಸ್ವಾಧೀನಪಡಿಸಿಕೊಳ್ಳಲು ಆದೇಶ ನೀಡಲಾಗಿದೆ.

ಮೇಲ್ಕಂಡ ಅಧಿನಿಯಮ 17ನೇ ಪ್ರಕರಣದ (1) ಉಪ ಪ್ರಕರಣ (4)ರ ಪ್ರಕರಣದಲ್ಲಿರುವ ಅಧಿಕಾರದ ಮೇಲೆ ಸದರಿ ಅಧಿನಿಯಮದ ಪ್ರಕರಣ 9 ರಲ್ಲಿನ ಪ್ರಕರಣದ 10ರ ಪ್ರಕಾರ ಹೊರಡಿಸಲಾಗುವ ತಿಳುವಳಿಕೆಯನ್ನು ಪ್ರಕಟಿಸಿದ ದಿನಾಂಕದಿಂದ 15 ದಿನಗಳು ಕಳೆದ ನಂತರ ಸದರಿ ಜಮೀನನ್ನು ಸ್ವಾಧೀನ ಪಡೆಯಲು ನಿರ್ದೇಶಿಸಿರುತ್ತದೆ.

ಸದರಿ ಭೂಮಿಗಳ ನಕಾಶೆಯನ್ನು ಪರಿವೀಕ್ಷಣೆಗಾಗಿ ಉಪವಿಭಾಗಾಧಿಕಾರಿಗಳು ಹಾಗೂ ಭೂಸ್ವಾಧೀನಾಧಿಕಾರಿಗಳು ತುಮಕೂರು ಉಪವಿಭಾಗ ತುಮಕೂರು ಇವರ ಕಛೇರಿಯಲ್ಲಿ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ:** ತುಮಕೂರು — **ತಾಲ್ಲೂಕು:** ತುಮಕೂರು

**ಹೋಬಳಿ:** ಊರ್ಡಿಗೆರೆ — **ಗ್ರಾಮ:** ಹಿರೇಹಳ್ಳಿ ಮತ್ತು ಚಿಕ್ಕಹಳ್ಳಿ

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ.ನಂ. | ತರಹೆ | ಭೂಸ್ವಾಧೀನ ವಿಸ್ತೀರ್ಣ | ಆಕಾರ ರೂ–ಪೈ |
|---|---|---|---|---|---|---|
| **ಹಿರೇಹಳ್ಳಿ** | | | | | | |
| 1 | ಮುದ್ವೀರಯ್ಯ ಬಿನ್ ವೀರಣ್ಣ, ಹುಚ್ಚೀರಯ್ಯ ಬಿನ್ ವೀರಣ್ಣ, ಸಿ.ವಿ. ಹೊಸಳ್ಳಯ್ಯ ಬಿನ್ ವೀರಣ್ಣ, ಶಿವಣ್ಣ ಬಿನ್ ವೀರಣ್ಣ | ಮುದ್ವೀರಯ್ಯ, ಹುಚ್ಚೀರಯ್ಯ, ಸಿ.ವಿ. ಹೊಸಳ್ಳಯ್ಯ, ಶಿವಣ್ಣ | 41/2 | ಖುಷ್ಕಿ | 0–14 | 0–35 |
| 2 | ಕೆ. ಜಯರಾಂ ಬಿನ್ ಕುಮಟಯ್ಯ | ಕೆ ಜಯರಾಂ | ಸ.ನಂ. 41/3 | ಖುಷ್ಕಿ | 0–08 | 0–20 |
| | | **ಒಟ್ಟು** | | | **0–22** | **0–55** |
| **ಚಿಕ್ಕಹಳ್ಳಿ** | | | | | | |
| 1 | ಸಿ.ಎಂ. ವೀರಬಸವಯ್ಯ ಬಿನ್ ಮುದ್ದಬಸಪ್ಪ, ಪಾರ್ವತಮ್ಮ ಕೋಂ ಪಿ.ಹೆಚ್. ರೇವಣ್ಣ | ಸಿ.ಎಂ. ವೀರಬಸವಯ್ಯ, ಪಾರ್ವತಮ್ಮ | ಸ.ನಂ. 69/3ಸಿ | ಖುಷ್ಕಿ<br>ತರಿ | 0–02 ಖು<br>0–04 ತ | 0–05<br>0–24 |

